

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1188 (1164) |
| ಸದಸ್ಯರ ಹೆಸರು | ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 16.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಲು ಗಣಿಗಾರಿಕೆಗೆ ಅನುಮತಿ ಪಡೆಯಲು ಇರಬೇಕಾದ ಕನಿಷ್ಟ ಮೂಲಭೂತ ಸೌಲಭ್ಯಗಳು ಯಾವುವು; | ಸರ್ಕಾರಿ ಪ್ರದೇಶದಲ್ಲಿನ ಉಪಖನಿಜ ನಿಕ್ಷೇಪ ತೆಗೆಯಲು ಹರಾಜು ಮೂಲಕ ಗುತ್ತಿಗೆ ಪಡೆಯಲು ಟೆಂಡರ್ ಡಾಕ್ಯೂಮೆಂಟ್ ನಲ್ಲಿ ನಿಗದಿಪಡಿಸುವ ತಾಂತ್ರಿಕ ಮತ್ತು ಅರ್ಹತಾ ಮಾನದಂಡಗಳನ್ನು ಹೊಂದಿರತಕ್ಕದ್ದು.<br>ಪಟ್ಟಾ ಜಮೀನುಗಳಲ್ಲಿ ಲಭ್ಯವಿರುವ ಉಪಖನಿಜ ತೆಗೆಯಲು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016ರ ನಿಯಮ 32 ರಂತೆ ಪಟ್ಟಾದಾರರಿಗೆ ಅಥವಾ ಪಟ್ಟಾದಾರರು ಒಪ್ಪಿಗೆ ನೀಡುವ ವ್ಯಕ್ತಿಗಳಿಗೆ ಕಂದಾಯ ಮತ್ತು ಅರಣ್ಯ ಇಲಾಖೆಗಳ ನಿರಾಕ್ಷೇಪಣಾ ಪತ್ರ, ಭೂಪರಿವರ್ತನೆ ಆದೇಶ, ಅನುಮೋದಿತ ಕ್ವಾರಿಯಿಂಗ್ ಪ್ಲಾನ್ ಮತ್ತು ಪರಿಸರ ಅನುಮತಿ ಪತ್ರ ಪಡೆದು ಸರ್ಕಾರದ ಅನುಮೋದನೆ ಪಡೆದ ನಂತರ ಸಂಬಂಧಿಸಿದ ಉಪ ನಿರ್ದೇಶಕರು / ಹಿರಿಯ ಭೂವಿಜ್ಞಾನಿ ರವರಿಂದ ಕಲ್ಲುಗಣಿಗಾರಿಕೆಗೆ ಲೈಸೆನ್ಸ್ ನೀಡಲಾಗುತ್ತಿದೆ. |
| ಆ) | ಕಳೆದ ಎರಡು ವರ್ಷಗಲ್ಲಿ ಎಷ್ಟು ಹೊಸ ಕಲ್ಲು ಗಣಿಗಾರಿಕೆ ಅನುಮತಿ ನೀಡಲಾಗಿದೆ; | ರಾಜ್ಯದಲ್ಲಿ ಕಳೆದ ಎರಡು ವರ್ಷಗಳಿಂದ 20 ಗ್ರಾನೈಟ್ ಗಣಿ ಗುತ್ತಿಗೆಗಳನ್ನು ಮತ್ತು 132 ಕಟ್ಟಡ ಕಲ್ಲುಗಣಿ ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ. |
| ಇ) | ಕಲ್ಲು ಗಣಿಗಾರಿಕೆಯಿಂದ ಉಂಟಾಗುವ ಪರಿಸರ ಮಾಲಿನ್ಯಕ್ಕೆ ಯಾರು ಹೊಣೆ; ಪರಿಸರ ಮಾಲಿನ್ಯ ತಡೆಯಲು ಸರ್ಕಾರ ಕೈಗೊಂಡ ಕಾರ್ಯಕ್ರಮಗಳೇನು? | ಕಲ್ಲು ಗಣಿಗಾರಿಕೆಗೆ ಗುತ್ತಿಗೆ / ಲೈಸೆನ್ಸ್ ಮಂಜೂರು ಮಾಡುವ ಪೂರ್ವದಲ್ಲಿ ಕೇಂದ್ರ ಅರಣ್ಯ, ಪರಿಸರ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದ ಆದೇಶದಂತೆ ಸಂಬಂಧಪಟ್ಟ ಅರ್ಜಿದಾರರಿಂದ ಕಡ್ಡಾಯವಾಗಿ ಅನುಮೋದಿತ ಕ್ವಾರಿ ಯೋಜನೆ ಮತ್ತು ಪರಿಸರ ಅನುಮತಿ ಪತ್ರ ಪಡೆದು ಗುತ್ತಿಗೆ / ಲೈಸೆನ್ಸ್ ಗಳನ್ನು ಮಂಜೂರು ಮಾಡಲಾಗುತ್ತದೆ.<br>ಕಲ್ಲುಗಣಿ ಗುತ್ತಿಗೆ ಪ್ರದೇಶದಲ್ಲಿ ಪರಿಸರ ಮಾಲಿನ್ಯ ಉಂಟಾದಲ್ಲಿ ಗುತ್ತಿಗೆದಾರರೇ ನೇರ ಹೊಣೆಗಾರರಾಗಿರುತ್ತಾರೆ. |

ಸಂಖ್ಯೆ ಸಿಐ 172 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)

ಗಣಿ ಮತ್ತು ಭೂವಿಜ್ಞಾನ ಸಚಿವರು.